

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 276
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್
ಉತ್ತರಿಸುವ ದಿನಾಂಕ : 14/09/2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಪುರಸಭೆ ಮತ್ತು ಪಟ್ಟಣ ಪಂಚಾಯತ್‌ಗಳನ್ನು ಮಾಡಲು ಸರ್ಕಾರದ ನಿಯಮಗಳೇನು; | ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆ ಅಧಿನಿಯಮ 1964 ಕಲಂ 349 ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು.<br>• ಅಂತಹ ಪ್ರದೇಶದ ಜನಸಂಖ್ಯೆಯು 10,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 20,000 ಕ್ಕೆ ಹೆಚ್ಚಿಲ್ಲದಂತಿರಬೇಕು.<br>• ಅಂತಹ ಪ್ರದೇಶದ ಜನಸಂಖ್ಯೆಯು ಜನಸಾಂದ್ರತೆಯು ಆ ಪ್ರದೇಶದ ಒಂದು ಚ.ಕಿ.ಮೀ ವಿಸ್ತೀರ್ಣಕ್ಕೆ 400 ಕ್ಕಿಂತ ಕಡಿಮೆ ಇಲ್ಲದಿರುವುದು.<br>• ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ. 50 ಕ್ಕಿಂತ ಕಡಿಮೆ ಇಲ್ಲದಿರುವುದು.<br>ಮುಂದುವರೆದು, ದಿನಾಂಕ 19.03.2015 ರ ಸಚಿವ ಸಂಪುಟ ಸಭೆಯ ನಿರ್ಣಯದಂತೆ 10,000 ಬದಲಿಗೆ 15,000ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯಿತಿಗಳನ್ನು ಮಾತ್ರ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುತ್ತಿದೆ. |
| | | ಪುರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ ನಿಯಮ 3 ಮತ್ತು 9 ಗಳನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು<br>1 ಆ ಪ್ರದೇಶದ ಜನಸಂಖ್ಯೆ 20,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 50,000 ಕ್ಕೆ ಹೆಚ್ಚಿಲ್ಲದಂತಿರಬೇಕು.<br>2 ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದರ ಕಿ.ಮೀ. ವಿಸ್ತೀರ್ಣಕ್ಕೆ 1500 ಕ್ಕಿಂತ ಕಡಿಮೆ ಇಲ್ಲದಿರುವುದು.<br>3 ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂತಹ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಬತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬರಿಗೆ 45 ರೂಪಾಯಿಗಳ ದರದಂತೆ ಲೆಕ್ಕಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆ ಇರದ ಹೊರತು.<br>4 ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50 ಕ್ಕಿಂತ ಕಡಿಮೆ ಇಲ್ಲದಿರುವುದು. |

..2

| | | |
|---|---|---|
| (ಆ) | 2016ರ ನಂತರ ಹೊಸದಾಗಿ ಮಾಡಲಾಗಿರುವ ಪುರಸಭೆ ಮತ್ತು ಪಟ್ಟಣ ಪಂಚಾಯತ್‌ಗಳ ವಿವರ ನೀಡುವುದು; | 2016ರ ನಂತರ ಹೊಸದಾಗಿ ಮಾಡಲಾಗಿರುವ ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಲಾಗಿದೆ. |
| (ಇ) | ಬಾಗಲಕೋಟೆ ಜಿಲ್ಲೆಯ ಶಿರೂರು ಪಟ್ಟಣ ಪಂಚಾಯತ್ ಮಾಡಿದ್ದು, ಈ ಪಟ್ಟಣ ಪಂಚಾಯತ್‌ಗೆ ನೀಲಾನಗರ ಮತ್ತು ಇತರ ಗ್ರಾಮಗಳು ಸೇರಿಸಿಕೊಂಡಿದ್ದು, ನೀಲಾನಗರ ಗ್ರಾಮವಾಸಿಗಳು ಪಟ್ಟಣ ಪಂಚಾಯತ್ ಮಾಡಿರುವುದನ್ನು ವಿರೋಧಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಬಾಗಲಕೋಟೆ ಜಿಲ್ಲೆ ಮತ್ತು ತಾಲ್ಲೂಕಿನ ಶಿರೂರು ಗ್ರಾಮ ಪಂಚಾಯಿತಿ ಮತ್ತು ನೀಲಾನಗರ ಮತ್ತು ಗುಂಡನಪಲ್ಲೆ ಗ್ರಾಮಗಳನ್ನು ಸೇರಿಸಿ ಶಿರೂರು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ದಿನಾಂಕ 05.11.2020 ರಂದು ಹೊರಡಿಸಲಾದ ಕರಡು ಅಧಿಸೂಚನೆ ಸಂಖ್ಯೆ: ನಅಇ 33 ಎಂಎಲ್‌ಆರ್ 2019 ಕ್ಕೆ ನೀಲಾನಗರ ಗ್ರಾಮಸ್ಥರಿಂದ ಆಕ್ಷೇಪಣೆ ಸಲ್ಲಿಕೆಯಾಗಿರುತ್ತದೆ. ಸದರಿ ಆಕ್ಷೇಪಣೆಯ ಬಗ್ಗೆ ಬಾಗಲಕೋಟೆ ಜಿಲ್ಲಾಧಿಕಾರಿಗಳು ಸಲ್ಲಿಸಿದ ಅಭಿಪ್ರಾಯದ ವರದಿಯನ್ವಯ ನಿಯಮಾನುಸಾರ ಪರಿಶೀಲಿಸಿ ದಿನಾಂಕ 22.01.2021 ರಲ್ಲಿ ಅಂತಿಮ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br><br>ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯ ಧಾರವಾಡ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ: 100225/2021 ಅನ್ನು ದಾಖಲಿಸಲಾಗಿದ್ದು, ಪ್ರಕರಣವು ದಿನಾಂಕ 12.04.2021 ರಂದು ವಜಾಗೊಂಡಿರುತ್ತದೆ.<br><br>ಮುಂದುವರೆದು, ಮಾನ್ಯ ಉಚ್ಚ ನ್ಯಾಯಾಲಯ ಬೆಂಗಳೂರು ಇಲ್ಲಿ ದಾಖಲಿಸಲಾಗಿರುವ ರಿಟ್ ಅರ್ಜಿ ಸಂಖ್ಯೆ: 2026/2021ರ ಪ್ರಕರಣವು ಬಾಕಿ ಇರುತ್ತದೆ. |
| (ಈ) | ನೀಲಾನಗರದ ಗ್ರಾಮಪಂಚಾಯತ್ ಅಲ್ಲಿನ ಜನರು ಲಂಬಾಣಿ ಜನರಾಗಿದ್ದು, ಇಲ್ಲಿನ ಜನರ ದಿನಗೂಲಿ ನೌಕರರುಗಳಾಗಿ ನರೇಗಾ (MNGREGA) ವಂಚಿತರಾಗುತ್ತಿದ್ದು, ಹಾಲಿ ಪಟ್ಟಣ ಪಂಚಾಯತ್‌ಯಿಂದ ನೀಲಾನಗರ ಗ್ರಾಮವನ್ನು ಕೈಬಿಡುವ ಚಿಂತನೆ ಸರ್ಕಾರಕ್ಕೆ ಇದೆಯೆ? | ಶಿರೂರು ಪಟ್ಟಣ ಪಂಚಾಯಿತಿಯಿಂದ ನೀಲಾನಗರ ಗ್ರಾಮವನ್ನು ಕೈಬಿಡುವ ಬಗ್ಗೆ ಶ್ರೀ ಪಿ. ರಾಜೀವ್, ಅಧ್ಯಕ್ಷರು ಹಾಗೂ ಶಾಸಕರು, ಕುಡಚಿ, ಕರ್ನಾಟಕ ತಾಂಡಾ ಅಭಿವೃದ್ಧಿ ನಿಯಮ ನಿಯಮಿತ ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಆದರೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು/ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರಿಂದ ಈ ಸಂಬಂಧ ಯಾವುದೇ ಪ್ರಸ್ತಾವನೆ ಬಂದಿರುವುದಿಲ್ಲ. |

ಸಂಖ್ಯೆ: ನಅಇ/ 28 /ಎಲ್‌ಸಿಕ್ಯೂ/2021

**(ಎನ್. ನಾಗರಾಜು (ಎಂ ಟಿ ಬಿ))**
ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

## ಅನುಬಂಧ

## 2016ರ ನಂತರ ಹೊಸದಾಗಿ ಮೇಲ್ದರ್ಜೆಗೇರಿಸಲಾದ ನಗರ ಸ್ಥಳೀಯ ಸಂಸ್ಥೆಗಳ ವಿವರ:

| ಕ್ರ. ಸಂ | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | ಅಧಿಸೂಚನೆ ಸಂಖ್ಯೆ | ದಿನಾಂಕ | ಮೇಲ್ದರ್ಜೆಗೇರಿಸಲಾದ ವಿವರ |
|---|---|---|---|---|---|
| 1 | ಬೆಂಗಳೂರು ನಗರ | ಕೋನಪ್ಪನ ಅಗ್ರಹಾರ | ನಅಇ 91 ಎಂಎಲ್‌ಆರ್ 2015, | 26.03.2018 | ಪುರಸಭೆ |
| 2 | | ದೊಡ್ಡತೋಗೂರು | ನಅಇ 90 ಎಂಎಲ್‌ಆರ್ 2015, | 26.03.2018 | ಪ.ಪಂಚಾಯಿತಿ |
| 3 | | ಹುಣಸಮಾರನಹಳ್ಳಿ | ನಅಇ 154 ಎಂಎಲ್‌ಆರ್ 2020 | 26.03.2021 | ಪುರಸಭೆ |
| 4 | | ಚಿಕ್ಕಬಾಣಾವರ | ನಅಇ 156 ಎಂಎಲ್‌ಆರ್ 2020 | 31.03.2021 | ಪುರಸಭೆ |
| 5 | ಬೆಂಗಳೂರು ಗ್ರಾಮಾಂತರ | ಬಾಶೆಟ್ಟಿಹಳ್ಳಿ | ನಅಇ 09 ಎಂಎಲ್‌ಆರ್ 2020 | 24.02.2021 | ಪ.ಪಂಚಾಯಿತಿ |
| 6 | ರಾಮನಗರ | ಹಾರೋಹಳ್ಳಿ | ನಅಇ 14 ಎಂಎಲ್‌ಆರ್ 2020 | 06.03.2021 | ಪ.ಪಂಚಾಯಿತಿ |
| 7 | ಮೈಸೂರು | ರಮ್ಮನಹಳ್ಳಿ | ನಅಇ 130 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತಿ |
| 8 | | ಕಡಕೊಳ | ನಅಇ 133 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತಿ |
| 9 | | ಶ್ರೀರಾಂಪುರ | ನಅಇ 143 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತ |
| 10 | | ಬೋಗಾದಿ | ನಅಇ 135 ಎಂಎಲ್‌ಆರ್ 2020 | 31.03.2021 | ಪ.ಪಂಚಾಯಿತಿ |
| 11 | ಬೆಳಗಾವಿ | ಕಾಗವಾಡ | ನಅಇ 48 ಎಂಎಲ್‌ಆರ್ 2019 | 19.02.2021 | ಪ.ಪಂಚಾಯಿತಿ |
| 12 | | ಯರಗಟ್ಟಿ | ನಅಇ 160 ಎಂಎಲ್‌ಆರ್ 2020 | 19.02.2021 | ಪ.ಪಂಚಾಯಿತಿ |
| 13 | | ಪೀರನವಾಡಿ | ನಅಇ 50 ಎಂಎಲ್‌ಆರ್ 2019 | 26.03.2021 | ಪ.ಪಂಚಾಯಿತಿ |
| 14 | | ನುಚ್ಚೆ | ನಅಇ 50 ಎಂಎಲ್‌ಆರ್ 2019 | 26.03.2021 | ಪ.ಪಂಚಾಯಿತಿ |
| 15 | | ಅಂಕಲಗಿ-ಅಕ್ಕತಂಗೇರಹಾಳ | ನಅಇ 111 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತಿ |
| 16 | | ಘಟಪ್ರಭಾ | ನಅಇ 96 ಎಂಎಲ್‌ಆರ್ 2020 | 19.02.2021 | ಪುರಸಭೆ |
| 17 | ವಿಜಯಪುರ | ತಿಕೋಟಾ | ನಅಇ 05 ಎಂಎಲ್‌ಆರ್ 2018 | 05.06.2020 | ಪ.ಪಂಚಾಯಿತಿ |
| 18 | | ಬಬಲೇಶ್ವರ | ನಅಇ 02 ಎಂಎಲ್‌ಆರ್ 2018 | 23.03.2021 | ಪ.ಪಂಚಾಯಿತಿ |
| 19 | ರಾಯಚೂರು | ಹಟ್ಟಿ | ನಅಇ 138 ಎಂಎಲ್‌ಆರ್ 2015 | 04.12.2017 | ಪ.ಪಂಚಾಯಿತಿ |
| 20 | | ಜಾಲಹಳ್ಳಿ | ನಅಇ 131 ಎಂಎಲ್‌ಆರ್ 2020 | 03.03.2021 | ಪ.ಪಂಚಾಯಿತಿ |
| 21 | | ನ್ಯಾಮತಿ | ನಅಇ 04 ಎಂಎಲ್‌ಆರ್ 2018 | 20.11.2020 | ಪ.ಪಂಚಾಯಿತಿ |
| 22 | ಯಾದಗಿರಿ | ಹುಣಸಗಿ | ನಅಇ 58 ಎಂಎಲ್‌ಆರ್ 2016 | 12.02.2020 | ಪ.ಪಂಚಾಯಿತಿ |
| 23 | ಉಡುಪಿ | ಬೈಂದೂರು | ನಅಇ 06 ಎಂಎಲ್‌ಆರ್ 2019 | 14.08.2020 | ಪ.ಪಂಚಾಯಿತಿ |
| 24 | ಬಾಗಲಕೋಟೆ | ಲೋಕಾಪುರ | ನಅಇ 06 ಎಂಎಲ್‌ಆರ್ 2020 | 14.08.2020 | ಪ.ಪಂಚಾಯಿತಿ |
| 25 | | ಶಿರೂರು | ನಅಇ 33 ಎಂಎಲ್‌ಆರ್ 2019 | 22.01.2021 | ಪ.ಪಂಚಾಯಿತಿ |
| 26 | ದಕ್ಷಿಣ ಕನ್ನಡ | ಸೋಮೇಶ್ವರ | ನಅಇ 83 ಎಂಎಲ್‌ಆರ್ 2019 | 24.06.2019 | ಪುರಸಭೆ |
| 27 | | ಕಡಬ | ನಅಇ 44 ಎಂಎಲ್‌ಆರ್ 2018 | 18.03.2020 | ಪ.ಪಂಚಾಯಿತಿ |
| 28 | | ಬಜಪೆ | ನಅಇ 92 ಎಂಎಲ್‌ಆರ್ 2020 | 19.02.2021 | ಪ.ಪಂಚಾಯಿತಿ |
| 29 | | ಕಿನ್ನಿಗೋಳಿ | ನಅಇ 20 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತಿ |
| 30 | ಉತ್ತರ ಕನ್ನಡ | ಮಂಕಿ | ನಅಇ 158 ಎಂಎಲ್‌ಆರ್ 2020 | 26.03.2021 | ಪ.ಪಂಚಾಯಿತಿ |
| 31 | ಹಾವೇರಿ | ರಟ್ಟಿಹಳ್ಳಿ | ನಅಇ 39 ಎಂಎಲ್‌ಆರ್ 2017 | 12.02.2020 | ಪ.ಪಂಚಾಯಿತಿ |
| 32 | ಮಂಡ್ಯ | ಬೆಳ್ಳೂರು | ನಅಇ 116 ಎಂಎಲ್‌ಆರ್ 2016 | 30.11.2017 | ಪ.ಪಂಚಾಯಿತಿ |
| 33 | ತುಮಕೂರು | ಹುಳಿಯಾರು | ನಅಇ 159 ಎಂಎಲ್‌ಆರ್ 2015 | 23.02.2018 | ಪ.ಪಂಚಾಯಿತಿ |
| 34 | ಕಲಬುರಗಿ | ಕಾಳಗಿ | ನಅಇ 136 ಎಂಎಲ್‌ಆರ್ 2016 | 10.01.2019 | ಪ.ಪಂಚಾಯಿತಿ |
| 35 | | ಕಮಲಾಪುರ | ನಅಇ 60 ಎಂಎಲ್‌ಆರ್ 2018 | 05.06.2021 | ಪ.ಪಂಚಾಯಿತಿ |
| 36 | | ಯಡ್ರಾಮಿ | ನಅಇ 87 ಎಂಎಲ್‌ಆರ್ 2015 | 05.11.2020 | ಪ.ಪಂಚಾಯಿತಿ |
| 37 | ಚಿಕ್ಕಮಗಳೂರು | ಅಜ್ಜಂಪುರ | ನಅಇ 67 ಎಂಎಲ್‌ಆರ್ 2017 | 13.04.2020 | ಪ.ಪಂಚಾಯಿತಿ |
| 38 | ಶಿವಮೊಗ್ಗ | ಸೊರಬ | ನಅಇ 11 ಎಂಎಲ್‌ಆರ್ 2019, | 03.03.2021 | ಪುರಸಭೆ |
| 39 | | ಶಿರಾಳಕೊಪ್ಪ | ನಅಇ 112 ಎಂಎಲ್‌ಆರ್ 2020 | 19.02.2021 | ಪುರಸಭೆ |
| 40 | | ಆನವಟ್ಟಿ | ನಅಇ 15 ಎಂಎಲ್‌ಆರ್ 2020 | 11.02.2021 | ಪ.ಪಂಚಾಯಿತಿ |
| 41 | | ಹೊಳೆಹೊನ್ನೂರು | ನಅಇ 99 ಎಂಎಲ್‌ಆರ್ 2020 | 17.02.2021 | ಪ.ಪಂಚಾಯಿತಿ |
| 42 | ದಾವಣಗೆರೆ | ಹೊನ್ನಾಳಿ | ನಅಇ 93 ಎಂಎಲ್‌ಆರ್ 2020 | 12.03.2021 | ಪುರಸಭೆ |
| 43 | ಚಿತ್ರದುರ್ಗ | ಹೊಳಲ್ಕೆರೆ | ನಅಇ 207 ಎಂಎಲ್‌ಆರ್ 2020 | 23.03.2021 | ಪುರಸಭೆ |

**ಷರಾ:** ಬೆಂಗಳೂರು ನಗರ ಜಿಲ್ಲೆಯ ಕೋನಪ್ಪನ ಅಗ್ರಹಾರ ಪುರಸಭೆಯನ್ನಾಗಿ ಮತ್ತು ದೊಡ್ಡತೋಗೂರು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಿದ ಅಂತಿಮ ಅಧಿಸೂಚನೆಗಳಿಗೆ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ತಡೆಯಾಜ್ಞೆ ಇರುತ್ತದೆ. ಕೋಲಾರ ಜಿಲ್ಲೆಯ ವೇಮಗಲ್-ಕುರುಗಲ್ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಿದ ಅಂತಿಮ ಅಧಿಸೂಚನೆಯನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 23.07.2021ರ ಆದೇಶದಲ್ಲಿ ರದ್ದುಗೊಳಿಸಿರುತ್ತದೆ.